


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 15-03-2021 ಪ್ರಶ್ನೆ ಸಂಖ್ಯೆ : 962(950)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಡಾ: ಚಂದ್ರಶೇಖರ್ ಬಿ.ಪಾಟೀಲ್(ಪದವೀಧರರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 15-03-2021

ಉತ್ತರಿಸುವ ಸಚಿವರು: ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

ವಿಷಯ : ಕುಮಾರ ನಾಯಕ ವರದಿಯ ಜಾರಿಯ ಬಗ್ಗೆ

(ಅ) ಪಿ.ಯು ಉಪನ್ಯಾಸಕರ ವೇತನ ತಾರತಮ್ಯವನ್ನು ಸರಿಪಡಿಸಲು ನೇಮಿಸಿದ್ದ ಕುಮಾರ ನಾಯಕ ವರದಿಯು ಯಥಾವತ್ತಾಗಿ ಜಾರಿಯಾಗದಿರುವುದಕ್ಕೆ ಕಾರಣವೇನು; (ಸ್ಪಷ್ಟ ಮಾಹಿತಿ ನೀಡುವುದು)

(ಆ) ಪ್ರೌಢ ಶಾಲೆಯಲ್ಲಿ ಸಹ ಶಿಕ್ಷಕರಾಗಿ ಸೇವೆ ಸಲ್ಲಿಸಿ ಮುಂಬಡ್ತಿ ಹೊಂದಿ ಕರ್ತವ್ಯ ನಿರ್ವಹಿಸುತ್ತಿರುವ ಉಪನ್ಯಾಸಕರು ಮುಂಬಡ್ತಿ ಪಡೆಯದ ಶಿಕ್ಷಕರಿಗಿಂತ ಕಡಿಮೆ ವೇತನವನ್ನು ಪಡೆಯುತ್ತಿದ್ದು ಅಂತಹ ಉಪನ್ಯಾಸಕರು 10, 15, 20, 25 ಮತ್ತು 30 ವರ್ಷದ ಹೆಚ್ಚುವರಿ ವೇತನ ಬಡ್ತಿಯಿಂದ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ತಾರತಮ್ಯಕ್ಕೆ ಕಾರಣವೇನು?